ಜೂನ್–2022

WCG
Wildlife Conservation Group

## ಲೇಖನಗಳು






**ವಿನ್ಯಾಸ**
ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**
ರವೀಂದ್ರ ಬಾಬು

**ಪರಿಷ್ಕರಣೆ**
ಮುರಳಿ ಎಸ್.
ಡಾ. ಮಧುಸೂಧನ ಹೆಚ್. ಸಿ.

**ಕರಡು ತಿದ್ದುಪಡಿ**
ಡಾ.ದೀಪಕ್ ಭ., ಮೈಸೂರು

# ಈಜಿ ಮರ

**ಸಾಮಾನ್ಯ ಹೆಸರು: Bastard teak**

**ವೈಜ್ಞಾನಿಕ ಹೆಸರು: *Premna tomentosa***



© ನಾಗೇಶ್ ಓ. ಎಸ್. ಈಜಿ ಮರ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ

ಭಾರತ ಮತ್ತು ಶ್ರೀಲಂಕಾ ದೇಶಗಳ ಬಹುತೇಕ ಕಾಡುಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಮರ, ಸುಮಾರು 15 ಮೀಟರ್ ಎತ್ತರಕ್ಕೆ ಬೆಳೆಯುವ ಮರವಾಗಿದ್ದು, ಮರದ ತೊಗಟೆ ಬೂದು ಮಿಶ್ರಿತ ಕಂದು ಬಣ್ಣದಿಂದ ಕೂಡಿರುತ್ತದೆ. ಎಲೆಗಳು ಸುಮಾರು ಎರಡರಿಂದ ಐದು ಸೆಂಟಿಮೀಟರ್ ಉದ್ದವಿದ್ದು, ಸರಳ ಎಲೆ ವಿನ್ಯಾಸವನ್ನು ಹೊಂದಿವೆ ಹಾಗು ಸುವಾಸನೆಯನ್ನು ಹೊಂದಿರುತ್ತವೆ. ಎಲೆಯ ತಳಭಾಗದಲ್ಲಿ ವೆಲ್ವೆಟ್ ಕೋಟಿಂಗ್ ಕಾಣಬಹುದು. ಸಾಮಾನ್ಯವಾಗಿ ಮಾರ್ಚ್ - ಮೇ ಸಮಯದಲ್ಲಿ ಹಳದಿ ಮಿಶ್ರಿತ ಬಿಳಿ ಬಣ್ಣದ ಹೂಗಳನ್ನು ಬಿಡುತ್ತವೆ. ಜೂನ್ ತಿಂಗಳಲ್ಲಿ ಅಂಡಾಕಾರದ ಕಪ್ಪುಬಣ್ಣದ ಹಣ್ಣುಗಳನ್ನು ಬಿಡುತ್ತವೆ. ಹಣ್ಣಿನ ಮೇಲೆ ಸಣ್ಣ ಸಣ್ಣ ಕೂದಲಿನ ರಚನೆಯನ್ನು ಕಾಣಬಹುದು. ಮರದ ಬಹುತೇಕ ಭಾಗಗಳನ್ನು ಆಯುರ್ವೇದ ಔಷಧಿಗಳಲ್ಲಿ ಉಪಯೋಗಿಸುತ್ತಾರೆ ಮರದ ತೊಗಟೆಯನ್ನು ಅತಿಸಾರಕ್ಕೆ ಔಷಧವಾಗಿ ಬಳಸಲಾಗುತ್ತದೆ.




# ಬೂದು ಮುಂಗುಸಿಯ ಮಿಲನ ಮಹೋತ್ಸವ

ಮುಂಗುಸಿ ಎಂಬ ಸ್ತನಿಯನ್ನು ಹಾವಿನ ಹೋರಾಟಕ್ಕೆ ಮಾತ್ರ ನೆನಪಿಸಿಕೊಳ್ಳಲಾಗುತ್ತದೆ. ಸಣ್ಣವರಿದ್ದಾಗ ಬೀದಿ ಬದಿಗಳಲ್ಲಿ ಹಾವಾಡಿಗರು ಹಗ್ಗ ಕಟ್ಟಿ ಇಟ್ಟುಕೊಂಡಿದ್ದ ಈ ಚುರುಕಿನ ಪ್ರಾಣಿಯನ್ನು ನೋಡಿದ್ದು ಬಿಟ್ಟರೆ ನಿಜವಾದ ಮುಂಗುಸಿ-ಹಾವಿನ ಕಾಳಗ ಚಲನ ಚಿತ್ರಗಳಲ್ಲಿ ಅಥವಾ ಡಿಸ್ಕವರಿ ಮತ್ತು ನ್ಯಾಶನಲ್ ಜಿಯಾಗ್ರಫಿಕ್ ಚಾನಲ್ಗಳಲ್ಲಿ ಮಾತ್ರ ಕಾಣಲಾಗಿತ್ತು. ಮುಂಗುಸಿಗಳನ್ನು ಹರ್ಪೆಸ್ಟಿಡೆ (Herpestidae) ಕುಟುಂಬದಲ್ಲಿ ಉದ್ದ ದೇಹದ, ಗಿಡ್ಡ ಕಾಲುಗಳ ಬೇಟೆಗಾರ ಪ್ರಾಣಿಗಳೊಂದಿಗೆ ಸೇರಿಸಿದ್ದಾರೆ. ಭಾರತದಲ್ಲಿ ಜೀವಿಸುವ ಮುಂಗುಸಿಗಳಲ್ಲಿ ಆರು ಪ್ರಭೇದಗಳಿವೆ. ಅದರಲ್ಲಿ ಅತೀ ಸಾಮಾನ್ಯವಾಗಿ ಕಂಡು ಬರುವುದು ಬೂದು ಮುಂಗುಸಿ (Indian Grey Mongoose). ಪ್ರಾಣಿಶಾಸ್ತ್ರೀಯವಾಗಿ ಇದನ್ನು *ಹರ್ಪೆಸ್ಟಿಸ್ ಎಡ್ವರ್ಡ್ಸಿ (Herpestes edwardsii)* ಎಂದು ಕರೆಯಲಾಗಿದೆ.

ಸುಮಾರಾಗಿ ಬೆಕ್ಕಿನ ಗಾತ್ರದ ಪ್ರಾಣಿ. ದೇಹದ ಉದ್ದ 35 ರಿಂದ 45 ಸೆಂಮೀ. ಮತ್ತು ದೇಹದಷ್ಟೇ ಉದ್ದವಾದ ಬಾಲವನ್ನು ಹೊಂದಿರುತ್ತವೆ. ತೂಕ 800 ಗ್ರಾಂ ನಿಂದ ಒಂದೂವರೆ ಕೆ.ಜಿ. ಯಷ್ಟಿರುತ್ತದೆ. ಚಿಕ್ಕ ಕಾಲುಗಳು., ಬೂದು ಬಣ್ಣದ ದೇಹದಲ್ಲಿ ತುಪ್ಪಳವಿದೆ. ತುಪ್ಪಳದ ಪ್ರತಿ ಕೂದಲಿನಲ್ಲಿ ಸರತಿಯಂತೆ ಹತ್ತು ಗಾಢ ಮತ್ತು ತಿಳಿ ಬಣ್ಣದ ಗೆರೆಗಳಿವೆ. ಕಾಲುಗಳು ಮೈ ಬಣ್ಣಕ್ಕಿಂತ ಗಾಢವಾಗಿವೆ. ಗಂಡುಗಳು ಹೆಣ್ಣುಗಳಿಗಿಂತ ದೊಡ್ಡದಾಗಿರುತ್ತವೆ.

ಕುತೂಹಲಭರಿತ, ಚುರುಕಾದ ದಿಟ್ಟ ನಡವಳಿಕೆ. ನೆಲವಾಸಿ ಮತ್ತು ಬಿಲಗಳಲ್ಲಿ ಅಡಗಿಕೊಳ್ಳುತ್ತವೆ. ಸಾಮಾನ್ಯವಾಗಿ ಒಂಟಿಯಾಗಿ ಅಥವಾ ಜೊತೆಯಲ್ಲಿ ಕಾಣಿಸಿಕೊಳ್ಳುತ್ತವೆ. ಕುರುಚಲು ಕಾಡು, ಕೃಷಿಭೂಮಿ, ಕೆರೆಗಳ ಆಸುಪಾಸು, ಕಲ್ಲು ಬಂಡೆಗಳ ನಡುವೆ ಮತ್ತು ಕಾಡಂಚಿನಲ್ಲಿ ಜೀವಿಸುತ್ತವೆ. ಮನುಷ್ಯನ ವಾಸಸ್ಥಳದ ಹತ್ತಿರವೂ ವಾಸಿಸಬಲ್ಲವು. ಮುಖ್ಯ ಆಹಾರವಾಗಿ ಇಲಿ, ಹಲ್ಲಿ, ಹಾವು ಮತ್ತು ದುಂಬಿಗಳನ್ನು ತಿನ್ನುತ್ತವೆ. ಹಾಗೆಯೇ ನೆಲದಲ್ಲಿರುವ ಹಕ್ಕಿಗಳು, ಮೊಟ್ಟೆಗಳು, ಚೇಳು, ಸಂಧಿಪದಿಗಳು, ಕಪ್ಪೆ, ಏಡಿ ಮುಂತಾದವುಗಳೂ ಆಗಬಹುದು. ಕೆಲವೊಮ್ಮೆ ಹಣ್ಣು ಮತ್ತು ಗಿಡದ ಬೇರುಗಳನ್ನು ತಿನ್ನುತ್ತವೆ. ಮುಂಗುಸಿಗಳಿಗೆ ಹಾವುಗಳು ಆಹಾರವೇ ಹೊರತು ಮತ್ತೇನು ವಿಶೇಷವಿಲ್ಲ. ಇವೆರಡರ ಸಂಬಂಧ ಬೇಟೆ-ಬೇಟೆಗಾರ, ಅಷ್ಟಕ್ಕೇ ಸೀಮಿತ.

ಹೀಗೆ ಕೆರೆಯೊಂದರ ಸಮೀಪ ಪಕ್ಷಿ ವೀಕ್ಷಣೆಯಲ್ಲಿ ತೊಡಗಿದ್ದಾಗ ಒಂದು ಮುಂಗುಸಿ ಕಾಣಿಸಿತು. ಅದು ಕ್ಯಾಮೆರಾ ಕಣ್ಣಿನಲ್ಲಿ ಸೆರೆಯಾಗುವುದರೊಳಗೆ ಸಂಗಾತಿಯೂ ಬಂತು. ಸ್ವಲ್ಪ ಹೊತ್ತಿನಲ್ಲಿ ತಮ್ಮಲ್ಲೇ ಮಾತನಾಡಿಕೊಂಡಂತೆ ಮಾಡಿ ದೂರದಲ್ಲಿದ್ದ ನಮ್ಮನ್ನು ನೋಡಿದವು. ನಮ್ಮಿಂದ ಏನೂ ತೊಂದರೆಯಿಲ್ಲವೆಂದು ಅರಿತ ನಂತರ ಪ್ರಣಯದಾಟವನ್ನು ಪ್ರಾರಂಭಿಸಿದವು. ಮೊದಲು ಗಂಡು ಹೆಣ್ಣಿನ ಮೈದಡವಿ ಲಲ್ಲೆಗೆರೆಯಿತು. ಒಂದು ಮತ್ತೊಂದರ ದೇಹವನ್ನು ಅಕ್ಕರೆಯಿಂದ ಪೂಸುವಂತೆ ತೋರಿತು. ಮೂತಿಯಿಂದ ಒಂದರ ದೇಹವನ್ನು ಇನ್ನೊಂದು ತೀಡಿತು. ನಾವು ನೋಡುತ್ತಿದ್ದಂತೆ ಗಂಡು ಹೆಣ್ಣಿನ ಮೇಲೆ ತನ್ನ ಮುಂದಿನ ಕಾಲುಗಳನ್ನಿರಿಸಿ ಮಿಲನದಲ್ಲಿ ತೊಡಗಿತು. ನಮ್ಮಿಂದ ಯಾವುದೇ ಅಪಾಯವಿಲ್ಲವೆಂದು ತಿಳಿದ ನಂತರ ಕೆಲವು ಕ್ಷಣಗಳವರೆಗೆ ಮಿಲನ ಕಾರ್ಯವನ್ನು ಮುಂದುವರೆಸಿದವು. ಈ ಅಪೂರ್ವ ಕ್ರಿಯೆಯ ಪ್ರತಿಯೊಂದು ಹಂತವೂ ನನ್ನ ಕ್ಯಾಮೆರಾದಲ್ಲಿ ಸೆರೆಯಾಯಿತು. ಸ್ವಲ್ಪ ಹೊತ್ತಿನಲ್ಲಿ ಹತ್ತಿರದ ಪೊದೆಯಲ್ಲಿ ಹುದುಗಿ ಕಾಣದಾದವು. ಸಾಮಾನ್ಯವಾಗಿ ಮಾರ್ಚ್ ನಿಂದ ಅಕ್ಟೋಬರ್ ವರೆಗೆ ಇವುಗಳ ಸಂತಾನಾಭಿವೃದ್ಧಿಯ ಕಾಲ. ವರ್ಷದಲ್ಲಿ ಎರಡರಿಂದ ಮೂರು ಬಾರಿ ಗರ್ಭಧರಿಸಬಲ್ಲವು. ಮಿಲನದ ನಂತರ ಹೆಣ್ಣು 60 ರಿಂದ 65 ದಿನಗಳಕಾಲ ಗರ್ಭಾವಸ್ಥೆಯಲ್ಲಿದ್ದು ಎರಡರಿಂದ ನಾಲ್ಕು ಮರಿಗಳಿಗೆ ಜನ್ಮ ನೀಡುತ್ತಾಳೆ. ಮೊದಲಿಗೆ ಮರಿಗಳು ಬಿಲದಲ್ಲಿ ತಾಯಿಯ ಹಾಲು ಕುಡಿದು ಬದುಕುತ್ತವೆ. ನಂತರ ತಾಯಿಯೊಡನೆ ಆಹಾರ ಹುಡುಕಲು ಹೊರಟು ಕ್ರಮೇಣ ಸ್ವತಂತ್ರ ಜೀವನ ನಡೆಸುತ್ತವೆ. ಇವುಗಳ ಆಯಸ್ಸು ಸರಿಸುಮಾರು ಏಳು ವರ್ಷಗಳು.



ತನ್ನ ಚುರುಕು ಜೀವನ ಶೈಲಿಯಿಂದ ವಿಷಯುಕ್ತ ಹಾವುಗಳನ್ನು ಸಹ ಬೇಟೆಯಾಡಬಲ್ಲದು. ಆಹಾರಕ್ಕಾಗಿ ದಿನವಿಡಿ ಪೊದೆಗಳಲ್ಲಿ ಹುಡುಕುವ ಇವು ಮುಂಜಾನೆ ಮತ್ತು ಸಂಜೆಯ ಹೊತ್ತು ಅತಿ ಚುರುಕಾಗಿರುತ್ತವೆ. ನಗರೀಕರಣ, ಹೆಚ್ಚಾದ ಕೀಟನಾಶಕಗಳ ಬಳಕೆ, ಕ್ಷೀಣಿಸುತ್ತಿರುವ ಆವಾಸ ಸ್ಥಾನಗಳು, ಪರಿಸರ ಮಾಲಿನ್ಯ ಮುಂತಾದ ಕಾರಣಗಳಿಂದ ನಶಿಸುತ್ತಿರುವ ಈ ಮುಂಗುಸಿಗಳ ಸಂತತಿ ದಾವಣೆಗೆರೆಯಂತಹ ಪ್ರದೇಶದಲ್ಲಿರುವುದು ಸಂತೋಷದ ಸಂಗತಿ. ಇವುಗಳು ಹೆಚ್ಚಿನ ಸಂಖ್ಯೆಯಲ್ಲಿದ್ದರೆ ಇಲಿಗಳ ಕಾಟ ಮತ್ತು ಅವುಗಳಿಂದಾಗುವ ಕಾಳು ನಾಶವೂ ಕಡಿಮೆಯಾಗುತ್ತದೆ. ಹಾಗೂ ವಸತಿ ಪ್ರದೇಶದ ಸುತ್ತ ಹಾವುಗಳ ಇರುವಿಕೆಯೂ ಕಡಿಮೆಯಾಗಿ ಜನರಿಗೆ ಉಪಯುಕ್ತವಾಗುತ್ತದೆ. ಜೀವವೈವಿಧ್ಯಕ್ಕೆ ತಮ್ಮದೆ ಕೊಡುಗೆ ನೀಡಿರುವ ಮುಂಗುಸಿಗಳ ಸಂತತಿ ಮುಂದುವರೆಯಲಿ ಎಂದು ಹಾರೈಸೋಣ. ಇಂತಹ ಅಪರೂಪದ ಪ್ರಭೇದ ನಿಸರ್ಗದ ಆಹಾರ ಸರಪಳಿಯ ಪ್ರಮುಖ ಕೊಂಡಿ. ಇವುಗಳನ್ನು ಸಂರಕ್ಷಿಸುವುದು ನಮ್ಮೆಲ್ಲರ ಹೊಣೆ.




**ಲೇಖನ:** ಡಾ. ಎಸ್. ಶಿಶುಪಾಲ

ದಾವಣಗೆರೆ ಜಿಲ್ಲೆ




# ಕರ್ಜಿಗೆಯೆಂಬ ಕಾಡ ಹಣ್ಣೊಂದರ ರುಚಿ ಸವಿಯುತ್ತಾ...

ಹಿಂದೊಮ್ಮೆ ಮಳೆಯಲ್ಲಿನ ನಡಿಗೆಯನ್ನು ಆನಂದಿಸುತ್ತಾ ಕಾಡ ಹಾದಿಯಲ್ಲಿ ಸಾಗುವಾಗ ಗಾಢ ಕೆಂಪು ಬಣ್ಣದ ಹಣ್ಣೊಂದು ಕೆಳಗೆ ಬಿದ್ದಿರುವುದು ಕಣ್ಣಿಗೆ ಬಿತ್ತು. ಅದನ್ನು ಎತ್ತಿಕೊಂಡವನು "ಒಳ್ಳೆ ಸೇಬು ಇದ್ದ ಹಾಗೆ ಇದೆ... ಯಾವ್ದೋ ಕಾಡು ಹಣ್ಣು..." ಎನ್ನುತ್ತಿರುವಾಗಲೇ ಗೆಳೆಯ ಮಧು ಪಟೇಲರು ಅದನ್ನು ತೆಗೆದುಕೊಂಡು "ಇದು ಕರ್ಜಿಗೆ ಹಣ್ಣು" ಎನ್ನುತ್ತಾ, ತಿನ್ನಲು ಯೋಗ್ಯವಾದ ಹಣ್ಣು ಎಂದು ತಿನ್ನಲಾರಂಭಿಸಿದರು. "ಅರೇ, ನಾನೂ ರುಚಿ ನೋಡ ಬಹುದಿತ್ತಲ್ಲ" ಎಂಬ ಭಾವ ಅರೆ ಕ್ಷಣ ಮನದಲ್ಲಿ ಮೂಡಿ ಹೋಯ್ತು...

ನಡಿಗೆ ಹೀಗೆ ಬಹುದೂರ ಸಾಗಿರುವಾಗಲೇ ಕಣ್ಣೆದುರು ಇದೇ ಕರ್ಜಿಗೆ ಬಳ್ಳಿಯು ಮೈ ತುಂಬಾ ಹಣ್ಣುಗಳ ರಾಶಿಯನ್ನೊತ್ತು ಮರವೊಂದಕ್ಕೆ ಹಬ್ಬಿರುವುದು ಎದುರಾಗಬೇಕೆ! ಕೆಲ ಹೊತ್ತಿನ ಹಿಂದಷ್ಟೇ ಗಮನಿಸಿದ್ದರ ಫಲವಾಗಿ ತಕ್ಷಣವೇ ಅದನ್ನು ಗುರುತು ಹಿಡಿಯಲು ಕಷ್ಟವಾಗಲಿಲ್ಲ. ತಕ್ಷಣವೇ ಜೊತೆಯಲ್ಲಿದ್ದವರನ್ನೆಲ್ಲಾ ಹಿಂದಿಕ್ಕಿ ಅದನ್ನು ಕೊಯ್ಯುವ ಕಾತರದಲ್ಲಿ ಬಿರುಸಾಗಿ ಮುನ್ನಡೆದೆ.

ಬಾಪು ದಿನೇಶಣ್ಣ ಬಳ್ಳಿಯ ಮುಳ್ಳಿನ ಬಗ್ಗೆ, ಮಳೆಗೆ ಮರ ಜಾರುವ ಬಗ್ಗೆ ಮಾತನಾಡುತ್ತಿರುವಾಗಲೇ ಸಾಮಾನ್ಯವಾಗಿ ಮರಗಳನ್ನೇರದ ನಾನು "ಇವನ್ಯಾರೋ ನಿಪುಣನಿರಬೇಕು..." ಎಂದು ಉಳಿದವರು ಭಾವಿಸುವ ರೀತಿಯಲ್ಲಿ ಮರ ಏರಿಬಿಟ್ಟಿದ್ದೆ! ಅಲ್ಲದೇ ಏರಿದವನು ಹಣ್ಣು ಕೊಯ್ದು ಕೊಟ್ಟಾನು ಎಂಬ ಕೆಳಗಿನವರ ತಕ್ಷಣದ ನಿರೀಕ್ಷೆಯನ್ನು ಹುಸಿಗೊಳಿಸಿ ಮಳೆಯಲ್ಲಿಯೇ ಮೊಬೈಲ್ ತೆಗೆದು ಈ ಕರ್ಜಿ ಹಣ್ಣುಗಳ ಫೋಟೋ ಕ್ಲಿಕ್ಕಿಸುತ್ತಿದ್ದೆ!!




ನಂತರದಲ್ಲಿ, ಕೈಗೆ ಸಿಕ್ಕ ಕೆಲವನ್ನು ಕೊಯ್ದು ಕೆಳಗೆ ಹಾಕಿದೆ. ಜೊತೆಗೆ, ಮರದ ಕೊಂಬೆಗಳನ್ನು ಅಲ್ಲಾಡಿಸುತ್ತಾ ಕೆಲ ಹಣ್ಣುಗಳು ಉದುರುವಂತೆ ಮಾಡಿದೆ.

ಈ ಕರ್ಜಿಗೆ ಹಣ್ಣನ್ನು ಕೊಯ್ದಾಗ ತೊಟ್ಟುಗಳಲ್ಲಿ ಹಲಸಿನ ಮೇಣದ ತರ ಬಿಳಿ ಬಣ್ಣದ ಒಸರುತ್ತಿತ್ತು. ಒರೆಸಿ ತಿರುಳು ತಿಂದರೆ ಕಪ್ಪು ದ್ರಾಕ್ಷಿ, ಸೇಬಿನ ಮಿಶ್ರಣ ತಿಂದಂತೆ. ಸ್ವಲ್ಪ ಒಗರು, ಸ್ವಲ್ಪ ಹುಳಿ, ಸ್ವಲ್ಪ ಸಿಹಿ ಮಿಶ್ರಿತ ವಿಶಿಷ್ಟವಾದ ರುಚಿ! ತಿನ್ನುವ ವೇಳೆಗಾಗಲೇ ಕೈಯೆಲ್ಲಾ ಮೇಣದ ಅಂಟು. ಬಾಯಲ್ಲಿಯೂ ಸ್ವಲ್ಪ ಮೇಣ ಅಂಟಿ ಬಬಲ್ ಗಮ್ ಜಗಿದಂತಾಗಿತ್ತು. ತಿರುಳ ಒಳಗಡೆ ಬೀಜಗಳಿದ್ದವು. ಹಣ್ಣಾಗಿ ಮಾಗಿ ನೆಲಕ್ಕೆ ಬಿದ್ದಿದ್ದ ಹಣ್ಣುಗಳನ್ನು ಎತ್ತಿ ನೋಡಿದರೆ ಒಂದು ರೀತಿಯ ಹೆಂಡದ ಗಮಲು! ಬಹುದೂರ ಕಾಡ ಹಾದಿಯಲ್ಲಿ ಸಾಗಿ ಆಯಾಸವೆನಿಸುವ ವೇಳೆಗೆ ಅನಿರೀಕ್ಷಿತವಾಗಿ ಇಂತಹದೊಂದು ಹಣ್ಣು ಸಿಕ್ಕರೆ ಅದೆಷ್ಟು ಖುಷಿಯಾಗಬೇಡ!

ಕಾರಿಸ ಕರಂಡಸ್ (Carissa carandas) ಎಂಬ ವೈಜ್ಞಾನಿಕ ಪ್ರಭೇದದ ಈ ಕರ್ಜಿ ಹಣ್ಣನ್ನು ನಮ್ಮಲ್ಲಿ ಕರ್ಜಿಗೆ ಅಥವಾ ಗರ್ಜಿಗೆ ಎಂದೂ ಕರೆಯುತ್ತಾರೆ. ಈ ಕರ್ಜಿ ಬಳ್ಳಿಗಳು ಸಾಮಾನ್ಯವಾಗಿ ಮಾರ್ಚ್‌ನಲ್ಲಿ ಹೂ ಬಿಟ್ಟರೆ ಮಳೆಗಾಲದ ಜುಲೈ - ಸೆಪ್ಟೆಂಬರ್ ಸಮಯದಲ್ಲಿ ಹಣ್ಣುಗಳನ್ನೊತ್ತು ಮೈತುಂಬಿರುತ್ತವೆ. ಇವನ್ನು ಕಾಯಿ ಇದ್ದಾಗ ಉಪ್ಪಿನಕಾಯಿ, ಚಟ್ನಿ ತಯಾರಿಕೆಯಲ್ಲಿಯೂ ಬಳಸುತ್ತಾರೆ. ಅಡುಗೆ ತಯಾರಿಕೆಯಲ್ಲಿ ಹುಳಿಯಾಗಿಯೂ ಬಳಸುವುದಿದೆ. ಇವು ಯಥೇಚ್ಛವಾಗಿ ಕಬ್ಬಿಣದ ಅಂಶವನ್ನೊಳಗೊಂಡಿವೆ. ಅಸ್ಕಾರ್ಬಿಕ್ ಆಮ್ಲ (Ascorbic acid) ವನ್ನು ಒಳಗೊಂಡಿದ್ದು, ಹೊಟ್ಟೆ ನೋವು, ಮಲಬದ್ಧತೆ ನಿವಾರಕಗಳಾಗಿವೆ. ವಿಟಮಿನ್-ಸಿ ಅಂಶವನ್ನು ಒಳಗೊಂಡಿದ್ದು ಸ್ಕರ್ವಿ ರೋಗವನ್ನು ತಡೆಗಟ್ಟಬಲ್ಲವು.

ಅದಿರಲಿ, ನಮ್ಮ ಅಜ್ಜ-ಅಜ್ಜಿಯರ ಕಾಲದ, ಅಪ್ಪ-ಅಮ್ಮಂದಿರ ಬಾಲ್ಯ ಕಾಲದ ಕೊಂಡಿಯಂತಿರುವ, ಅವರ ಆಯಸ್ಸು, ಆರೋಗ್ಯಕ್ಕೆ ಕೊಡುಗೆ ನೀಡುತ್ತಿದ್ದ ಈ ಕಾಡು ಹಣ್ಣುಗಳು ನಮ್ಮದೇ ಕಾಲಕ್ಕೆ ನಶಿಸಿ ಹೋದಂತಿವೆ. ಇನ್ನೂ ನಮ್ಮ ಮುಂದಿನ ಪೀಳಿಗೆಗಳಲ್ಲಿ ಅದ್ಯಾರೋ ಕೆಲ ಸಸ್ಯಶಾಸ್ತ್ರದ ವಿದ್ಯಾರ್ಥಿಗಳು ತರಗತಿಗಳಲ್ಲಿ ಮಾತ್ರ ಇವುಗಳ ಬಗ್ಗೆ ಓದಬಹುದಷ್ಟೇ! ಅತ್ಯಾಧುನಿಕತೆಯ ಹೆಸರಲ್ಲಿ ಬದಲಾಗುತ್ತಿರುವ ಜೀವನ ಪದ್ಧತಿಗಳು ಮೇಲ್ನೋಟಕ್ಕೆ ನಮ್ಮ ಜೀವನ ಮಟ್ಟವನ್ನು ಸುಧಾರಿಸುತ್ತಿರುವಂತೆ ಭಾಸವಾದರೂ ನಮ್ಮ ಹಿಂದಿನವರು ಅನುಭವಿಸುತ್ತಿದ್ದ ಪ್ರಕೃತಿಯ ಅದೆಷ್ಟೋ ಸ್ವಾಭಾವಿಕ ಕೊಡುಗೆಗಳನ್ನು, ಅತ್ಯುನ್ನತ ಜೀವನ ಶೈಲಿಯನ್ನು ದಿನನಿತ್ಯ ನಮ್ಮಿಂದ ಕಿತ್ತುಕೊಳ್ಳುತ್ತಲೇ ಸಾಗುತ್ತಿವೆ ಎಂಬುದು ಕಟು ಸತ್ಯ!







**ಲೇಖನ:** **ಪೂರ್ಣೇಶ್ ಮತ್ತಾವರ**

**ಚಿಕ್ಕಮಗಳೂರು ಜಿಲ್ಲೆ**




**ವಿವಿ ಅಂಕಣ**

# ಸಮುದ್ರದಾಳದಿಂದ ಹಿಮಾಲಯದೆತ್ತರಕ್ಕೊ

ರಾಮ ದೇವರ ಬೆಟ್ಟ ದೂರದಿಂದ ರಾಮನ ಮೊಗದಂತೆ ಶಾಂತವಾಗಿ ಕಂಡರೂ, ಅದರ ತುದಿಗೆ ಹತ್ತಲು ಹನುಮನ ಶಕ್ತಿ ಮತ್ತು ಧೈರ್ಯ ಬೇಕು. ಚಾರಣಿಗರಿಗೆ ಇದು ಸುಲಭವಿರಬಹುದು. ಆದರೆ ವಾರವೆಲ್ಲಾ ಅಥವಾ ಕೆಲವೊಮ್ಮೆ ತಿಂಗಳೆಲ್ಲಾ ಕೂತು ಕೆಲಸ ಮಾಡುವವರಿಗೆ ಹೀಗೆ ಅಪರೂಪದ ಚಾರಣ ಸಣ್ಣದಾದರೂ, ಆಯಾಸದಾಯಕವಾಗಿರುತ್ತದೆ. ವಿಶೇಷವಾಗಿ ರಾಮನಗರದ ಆ ಬಿಸಿಲು ಆಯಾಸ ಕಾರ್ಯಕ್ಕೆ ಪುಷ್ಠಿ ನೀಡುತ್ತದೆ. ರಾಮದೇವರ ಕೊನೆಯ ಬಂಡೆಯಲ್ಲಂತೂ ಆ ಕಬ್ಬಿಣದ ಹಿಡಿಕೆ ಮತ್ತು ಮೆಟ್ಟಿಲುಗಳಿಲ್ಲದಿದ್ದರೆ, ನನ್ನ ಹಾಗೆ ಸ್ವಲ್ಪ ಹೆದರಿಕೆ ಇರುವ ವ್ಯಕ್ತಿಗಳಿಗೆ ಅದನ್ನು ಹತ್ತುವುದು ಅಸಾಧ್ಯಕ್ಕೆ ಹತ್ತಿರದ ಮಾತಾಗುತ್ತಿತ್ತು. ಹೇಗೋ ಕಷ್ಟಪಟ್ಟು ಮೇಲೆ ತಲುಪಿದಾಗ ನನಗೆ ಕಂಡದ್ದು, ಪೂರ್ವದಲ್ಲಿ ಬೆಂಗಳೂರು-ಮೈಸೂರು ಹೆದ್ದಾರಿಯಾದರೆ, ದಕ್ಷಿಣಕ್ಕೆ ಬಿದಿರು ಕಾಡಿನ ಮಧ್ಯೆ ತಲೆ ಎತ್ತಿ ನಿಂತಿರುವ ಬಂಡೆಗಳು. ಪಶ್ಚಿಮಕ್ಕೆ ತೆಂಗಿನ ತೋಟಸಹಿತ ಮನೆಗಳು, ಹೀಗೆ ಎತ್ತ ನೋಡಿದರೂ ವೈವಿಧ್ಯ ಭೂಪ್ರದೇಶಗಳು. ಇವೆಲ್ಲವನ್ನು ಸವಿದು ಹತ್ತುವಾಗ ಮಾಡಿದ ಸಾಹಸವನ್ನೇ ಅನುಸರಿಸಿ ಒಂದೊಂದೇ ಹೆಜ್ಜೆಯನ್ನು ಎಣಿಸಿ ಎಣಿಸಿ ಇಡುವಂತೆ ಇಟ್ಟು ಇಳಿದು ಬರುತ್ತಿದ್ದೆ. ಬರುವ ದಾರಿಯಲ್ಲಿ ಕಂಡ ಸಹ್ಯಾದ್ರಿ ಚಿಟ್ಟೆ (ಹಕ್ಕಿರೆಕ್ಕೆ / Birdwing) ಕಣ್ಣಿನ ನೇರಕ್ಕೆ ಸಿಕ್ಕಿತು. ಮೊದಲಬಾರಿಗೆ ಆ ಚಿಟ್ಟೆ ಮಕರಂದ ಸವಿಯುವುದನ್ನು ಕಣ್ಣಾರೆ ಕೆಲವು ನಿಮಿಷಗಳವರೆಗೆ ನೋಡಿದ್ದು ಬಹಳ ಖುಷಿಯುಣಿಸಿತು. ಹಾಗೇ ಮುಂದೆ ಇಳಿದು ಬರುತ್ತಾ ನನ್ನ ಗಮನವನ್ನು ಚಿಟ್ಟೆಗಳ ಮೇಲೆ ಹರಿಸುತ್ತಿರುವಾಗ ನಾವಿಕ ಚಿಟ್ಟೆ (Common sailor) ಕುಣಿದು ಕುಪ್ಪಳಿಸುವ ಹಾಗೆ ರೆಕ್ಕೆ ಬಡಿಯುತ್ತಾ ಎಲೆಯ ಮೇಲೆ ಕುಳಿತುಕೊಂಡಿತು. ಇನ್ನೇನು ಅದರ ಬಳಿಹೋಗಿ ಫೋಟೋ ಕ್ಲಿಕ್ಕಿಸುವಷ್ಟರಲ್ಲಿ ಮತ್ತೆ ಹಾರಿ

ಕುಣಿಯುತ್ತಾ ಮತ್ತೊಂದು ಎಲೆಯ ಮೇಲೆ ಕುಳಿತುಕೊಂಡಿತು. ಈ ಬಾರಿ ಕಾದು ನೋಡೋಣ ಎಂದು ಹಾಗೆ ನಿಂತೆ. ಅಲ್ಲಿಂದಲೂ ಅದು ಕೆಲವೇ ಸೆಕೆಂಡುಗಳಲ್ಲಿ ಮತ್ತೆ ಹಾರಿ ನನ್ನೆಡೆಗೇ ಬಂದು, ತಲೆಯ ಮೇಲಿನಿಂದ ನನ್ನ ಪಕ್ಕದಲ್ಲೇ ಇದ್ದ ಕಿತ್ತಳೆ ಬಣ್ಣದ ಬಿಸ್ಕೆಟ್ ಕವರ್ ನ ಮೇಲೆ ಹೋಗಿ ಕುಳಿತುಕೊಂಡಿತು. ಅದು ಪ್ಲಾಸ್ಟಿಕ್ ಎಂದು ತಿಳಿಯದ ಅದು ಹೂವೆಂದು ಭಾವಿಸಿ ಎಲೆಗಳ ಮೇಲೆ ಇದ್ದ ಸಮಯಕ್ಕಿಂತ ಹೆಚ್ಚು ಸಮಯ ಆ ಪ್ಲಾಸ್ಟಿಕ್ ಮೇಲೆಯೇ ಇತ್ತು. ಬಹುಶಃ ಅಷ್ಟು ಸಮಯ ಇದ್ದಮೇಲೆ ಅದು ಹೂವಲ್ಲವೆಂದು ತಿಳಿದು ಮರಳಿ ತನ್ನ ಹಾರುವ ಕುಣಿತವನ್ನು ಮುಂದುವರೆಸಿತು.



ಇದೊಂದು ಸಾಮಾನ್ಯ ಹಾಗೂ ಸಣ್ಣ ಗಮನಿಕೆಯಾದರೂ ಇದರ ಒಳ ಅರ್ಥ ಬಹಳಷ್ಟಿದೆ. ಬಹುಪಯೋಗಿಯಾಗಿ ಬಂದ ಪ್ಲಾಸ್ಟಿಕ್, ಈಗ ಬಹುರೂಪಿ ಮಾರಕವಾಗಿ ಪರಿಗಣಿಸಿರುವುದು ನಾವೆಲ್ಲ ಕೇಳುತ್ತಲೇ ಇದ್ದೇವೆ. ಕೆಲವನ್ನು ನೋಡುತ್ತಲೂ ಇದ್ದೇವೆ. ಆದರೆ ಅದಕ್ಕಿಂತ ಹೆಚ್ಚು ಅಪಾಯಕಾರಿ ಸಂಗತಿ ಎಂದರೆ, ನಮ್ಮ ನಿತ್ಯ ಜೀವನದಲ್ಲಿ ಬಳಸುವ ಪ್ಲಾಸ್ಟಿಕ್ ನ ಪರಿಣಾಮವನ್ನೂ ಹಾಗೂ ಅದರಿಂದ ನಮ್ಮ ಸುತ್ತಲ ಜೀವಿಗಳಿಗೆ ಆಗುತ್ತಿರುವ ಉಪಟಳವನ್ನು ನೋಡಿಯೂ ನೋಡದ ಹಾಗೆ ಸುಮ್ಮನಿರುವುದು. ಜೊತೆಗೆ ಇವೆಲ್ಲಾ ತೊಂದರೆಗಳೇ ಅಲ್ಲ, ನಾವು ತಲೆಕೆಡಿಸಿಕೊಳ್ಳಬೇಕಿರುವ ಸಂಸಾರ ತಾಪತ್ರಯಗಳು ಎಷ್ಟೋ ಇವೆ ಎನ್ನುವವರಿಗೆ ಇವು ಹೇಳಿಯೂ ಪ್ರಯೋಜನವಿಲ್ಲ. ಆದರೆ ಚಾರಣ, ಪರ್ವತಾರೋಹಣಕ್ಕೆ ತೆರಳುವ ಮಹಾನುಭಾವರು ಮುಂಚೆಯಾದರೂ ಪ್ರಕೃತಿಯ ಬಗ್ಗೆ ಸ್ವಲ್ಪ ಜ್ಞಾನ, ಕಾಳಜಿಯಿಂದ ನಡೆದುಕೊಳ್ಳುತ್ತಿದ್ದರು. ಆದರೆ ಈಗಿನ ದಿನಗಳಲ್ಲಿ ಎಲ್ಲರಿಗಿಂತ ಹೆಚ್ಚಾಗಿ ಓದಿಕೊಂಡಿರುವ ಚಾರಣಿಗರೇ ಅದನ್ನು ಕೇವಲ ಮನೋಲ್ಲಾಸ ಮತ್ತು ಮೋಜು ಮಸ್ತಿಗಾಗಿ ಮಾಡುತ್ತಿರುವುದು ವಿಷಾದನೀಯ. ಇದರ ಸ್ಪಷ್ಟ ಉದಾಹರಣೆಯಂತೆ ಇತ್ತೀಚೆಗೆ ನಡೆದ ಸಂಶೋಧನೆ, ಪ್ರಪಂಚದ ಅತೀ ಎತ್ತರದ ಪರ್ವತ ಶ್ರೇಣಿಗಳಾದ ಹಿಮಾಲಯದ ಎತ್ತರ ಪರ್ವತ ಪ್ರದೇಶಲ್ಲಿ ಇದ್ದ ಪ್ಲಾಸ್ಟಿಕ್ಕನ್ನು ಹೊರಗೆಳೆದು ತೋರಿಸುತ್ತಿದೆ.

ಸಮುದ್ರ ಲೆಕ್ಕವಿಲ್ಲದಷ್ಟು ಜೀವರಾಶಿಯನ್ನಲ್ಲದೇ, ಲೆಕ್ಕವಿಲ್ಲದಷ್ಟು ಪ್ಲಾಸ್ಟಿಕ್ ಅನ್ನೂ ಸಹ ತನ್ನ ಮಡಿಲಲ್ಲಿ ಇರಿಸಿದೆ. ಎಷ್ಟೆಂದರೆ ನಮ್ಮ ಭೂಮಿಯಲ್ಲಿ 1950ರಲ್ಲೇ 500,00,00,000 (500 ಕೋಟಿ) ಕೆ.ಜಿ. ಪ್ಲಾಸ್ಟಿಕ್ ಅನ್ನು ನಾವು ಬಳಸುತ್ತಿದ್ದೆವು. 2020ನ್ನು ತಲುಪುವಷ್ಟರಲ್ಲಿ 33000,00,00,000 (33,000 ಕೋಟಿ) ಕೆ.ಜಿ. ಪ್ಲಾಸ್ಟಿಕ್ ಅನ್ನು ನಾವು ಬಳಸುತ್ತಿದ್ದೇವೆ. ಇಷ್ಟು ಪ್ಲಾಸ್ಟಿಕ್ ಗಳಲ್ಲಿ ಬಹು ಭಾಗ ಸಮುದ್ರವನ್ನೇ ಸೇರುವುದು. ಅಲ್ಲಿ ಕೊಳೆಯದ ಈ ಚಿರಾಯು, ಬಿಸಿಲು, ಗಾಳಿ, ಅಲೆಗಳಿಂದ ಸಣ್ಣ ಸಣ್ಣ ಕಣಗಳಾಗಿ ಪುಡಿಯಾಗುತ್ತವೆ. ಇವುಗಳನ್ನು ಆಹಾರವಾಗಿ ಭ್ರಮಿಸಿ ತಿನ್ನುವ ಜಲಚರಗಳು, ಅದರಿಂದ ಹೊರಬರುವ ವಿಷ ಪದಾರ್ಥಗಳನ್ನು ಸೇವಿಸುವ ನೀರಲ್ಲಿ ನೀರಾಗಿಹೋಗುತ್ತವೆ. ವಿಶೇಷವಾಗಿ 5 ಎಮ್. ಎಮ್. ಕ್ಕಿಂತ ಕಡಿಮೆ ಇರುವ ಪ್ಲಾಸ್ಟಿಕ್ಗಳು ಮೀನುಗಳ ಕಿವಿರುಗಳಲ್ಲಿ ಸಿಲುಕಿ ಕೊಲ್ಲುತ್ತವೆ. ಹೀಗೆ ಒಮ್ಮೆ ಬಳಸಿ ತೊಲಗಿಸಿದ ಪ್ಲಾಸ್ಟಿಕ್ ನಿಂದ ಅದೆಷ್ಟೋ ಅಮಾಯಕ ಜೀವಿಗಳು ಬೆಲೆ ತೆರಬೇಕಾಗಿದೆ. ಇವುಗಳ ಅಸ್ತಿತ್ವ ಎಲ್ಲೆಲ್ಲಿದೆ ಎಂದರೆ ಪ್ರಪಂಚದ ಮೂಲೆ ಮೂಲೆಯಲ್ಲಿ, ಸಮುದ್ರದಾಳದಿಂದ ಹಿಡಿದು ಹಿಮಾಲಯಪರ್ವತದ ಎತ್ತರದವರೆಗೂ ಹಬ್ಬಿದೆ. ಅವುಗಳಲ್ಲಿ ಕೆಲವನ್ನು ಹೇಳುವುದಾದರೆ...

***ಪ್ಲಾಸ್ಟಿಕ್ ನ ಆಳದ ಸ್ಕೂಬಾ ಡೈವ್... (ಸಮುದ್ರದಾಳದಲ್ಲಿ)***




ಸಮುದ್ರಲ್ಲಿ ತೇಲುವ 'ದಿ ಗ್ರೇಟ್ ಪೆಸಿಫಿಕ್ ಗಾರ್ಬೇಜ್ ಪ್ಯಾಚ್' ಬಗ್ಗೆ ಸಾಮಾನ್ಯವಾಗಿ ಎಲ್ಲರಿಗೂ ತಿಳಿದಿರುತ್ತದೆ. ಆದರೆ ಸಮುದ್ರ ಮೇಲೆ ತೇಲುವ ಈ ಜೈರ್ ಗಳು ಕೇವಲ ತೇಲುತ್ತಿರುವ ಹಿಮಪರ್ವತದ ತುದಿ ಮಾತ್ರ. 2019ರಲ್ಲಿ ಸಂಗ್ರಹಿಸಿದ 90 ಕಠಿಣಚರ್ಮಿಗಳಲ್ಲಿ(crustaceans) 65 ಜೀವಿಗಳಲ್ಲಿ 'ಮೈಕ್ರೋಪ್ಲಾಸ್ಟಿಕ್'ಗಳು ಸಿಕ್ಕಿವೆ. ಅಷ್ಟೇ ಅಲ್ಲ ಪ್ರಪಂಚದ ಅತ್ಯಂತ ಆಳದ, ಸಮುದ್ರದೊಳಗಿನ 'ಮರೀನ ಟ್ರೆಂಚ್' ಪ್ರದೇಶದಲ್ಲಿ 10,890 ಮೀಟರ್ (ಸರಿ ಸುಮಾರು 11 ಕಿ. ಮೀ) ಆಳದಲ್ಲಿ ಸಂಗ್ರಹಿಸಿದ ಕ್ರಿಟ್ಟರ್ ಎಂಬ ಸಮುದ್ರ ಕೀಟದ ಹೊಟ್ಟೆಯಲ್ಲಿ ಪ್ಲಾಸ್ಟಿಕ್ ಸಿಕ್ಕಿದೆ ಎಂದರೆ ನೀವೇ ಅರ್ಥಮಾಡಿಕೊಳ್ಳಿ. ಇನ್ನೊಂದು ಸಂಶೋಧನೆಯ ಪ್ರಕಾರ ಸಮುದ್ರಜೀವಿಗಳ ಜೀವಕ್ಕೆ ಕುತ್ತು ತರುವ ಪ್ಲಾಸ್ಟಿಕ್ ಗಳು ಇರುವುದು ಸಮುದ್ರದ ಮೇಲ್ಮೈನಿಂದ 200 ರಿಂದ 600 ಮೀಟರ್ ಆಳದಲ್ಲಿನ ಜಲ ಪ್ರದೇಶದಲ್ಲಿ.

### *ಎತ್ತರಕ್ಕೇರಿದ ಚಾರಣಿಗ – ಪ್ಲಾಸ್ಟಿಕ್... (ಮೌಂಟ್ ಎವೆರೆಸ್ಟಲ್ಲಿ)*



ಹಿಮಾಲಯ ಮತ್ತು ಮಂಜೆಂದರೆ ಅಲ್ಲಿ ಆಡುವ, ಚಾರಣ ಹೊರಡುವ ಆಸೆ ಹುಟ್ಟುತ್ತದೆ. ಆದರೆ ಅದೇ ಆಸೆ ಏನೆಲ್ಲಾ ಮಾಡಿದೆ ಎಂದು ಕೇಳಿದರೆ ಅಚ್ಚರಿಯಾಗಬಹುದು. ಮೌಂಟ್ ಎವೆರೆಸ್ಟ್ ಹತ್ತುವ ಮೊದಲು ತಂಗುವ 'ಬೇಸ್ ಕ್ಯಾಂಪ್'ನಲ್ಲಿ ಪ್ರತೀ ಕ್ಯುಬಿಕ್ ಮೀಟರ್ ಗೆ 1,19,000 ಪ್ಲಾಸ್ಟಿಕ್ ಪೀಸ್ ಗಳು ದೊರಕುತ್ತಿದೆಯಂತೆ. ಅಷ್ಟೇ ಅಲ್ಲ ಸಮುದ್ರ ಮಟ್ಟದಿಂದ 8,440 ಮೀಟರ್ ಎತ್ತರದ ಪ್ರದೇಶ ಅಂದರೆ ಮೌಂಟ್ ಎವೆರೆಸ್ಟ್ ನ ತುದಿಯಲ್ಲಿ ಸಹ ಪ್ಲಾಸ್ಟಿಕ್ ಪೀಸ್ ಸಿಕ್ಕಿವೆ. ಅದರ ಪರಿಣಾಮವಾಗಿಯೋ ಏನೋ ಹಿಮಾಲಯದಲ್ಲಿ ಉಗಮವಾಗಿ ಬರುವ ಅತ್ಯಂತ ಶುದ್ಧ ಎಂದು ನಾವು ಭಾವಿಸುವ ಹಿಮನದಿಗಳಲ್ಲಿ ಪ್ರತೀ 8 ರಲ್ಲಿನ 3 ಸ್ಯಾಂಪಲ್ ಗಳು ಪ್ಲಾಸ್ಟಿಕ್ ಅನ್ನು ಹೊಂದಿವೆ. ಇಲ್ಲಿ ಸಿಕ್ಕ ಪ್ಲಾಸ್ಟಿಕ್ ಗಳು ಚಾರಣಿಗರ ಬಟ್ಟೆಯಲ್ಲಿ ಅಥವಾ ಬಳಸುವ ವಸ್ತುಗಳಲ್ಲಿ ಸಿಗುವ 'ಪಾಲಿಸ್ಟೆರ್ ಫೈಬರ್' ಆಗಿದೆ.

### *ತೇಲಿಬಂದ ಪ್ಲಾಸ್ಟಿಕ್ ಮಳೆ... (ಗಾಳಿಯಲ್ಲಿ)*

ಪೈರಿನೀಸ್ ಪರ್ವತಶ್ರೇಣಿಯಲ್ಲಿ ಸ್ಥಾಪಿಸಿದ ಹವಾಮಾನ ಪರಿವೀಕ್ಷಣಾ ಕೇಂದ್ರದಲ್ಲಿ ದಾಖಲಿಸಿದ ಹಾಗೆ ಪ್ಲಾಸ್ಟಿಕ್ ಗಳು ದೂರದ ಪ್ರದೇಶದಿಂದ ಗಾಳಿಯಲ್ಲಿ ತೇಲಿಬಂದು ಮಳೆಯ ಹಾಗೆ ಸುರಿಯುತ್ತಿದೆಯಂತೆ. ದಿನಕ್ಕೆ ಒಂದು ಚದರ ಮೀಟರ್ ಜಾಗದಲ್ಲಿ 365 ಪ್ಲಾಸ್ಟಿಕ್ ಕಣಗಳ ಮಳೆ ಸುರಿಯುತ್ತಿದೆಯಂತೆ. ಹಾಗೂ ಹೀಗೆ ಬೀಳುವ ಪ್ಲಾಸ್ಟಿಕ್ ಕನಿಷ್ಟ 95 ಕಿ.ಮೀ. ದೂರದಿಂದ ತೇಲಿ ಬರುತ್ತಿದೆ, ಎನ್ನುತ್ತಾರೆ ಸಂಶೋಧಕರು.

### *ಭವಿಷ್ಯದ ಪ್ಲಾಸ್ಟಿಕ್ ಪಳೆಯುಳಿಕೆ... (ಮಂಜಿನೊಳಗೆ)*

2018ರ ಒಂದು ಸಂಶೋಧನೆಯಲ್ಲಿ ತಿಳಿದುಬಂದ ವಿಶೇಷ ಸುದ್ದಿ ಹೀಗಿದೆ, ಮನುಷ್ಯ ತನ್ನ ಅಸ್ತಿತ್ವವನ್ನು ಎಲ್ಲಾ ಕಡೆ ಸಾಧಿಸಿದ್ದರೂ ಕಡಿಮೆ ಸಂಖ್ಯೆಲ್ಲಿರುವ ಪ್ರದೇಶವೆಂದರೆ ಭೂಮಿಯ ಧೃವದ ಮಂಜಿನ ಪ್ರದೇಶಗಳು. ದೂರದಿಂದ ಬೆಳ್ಳಗೆ ಕಾಣುವ ಅಂತಹ ಧೃವದ ಮಂಜಿನಲ್ಲೂ ಸಹ ಪ್ಯಾಕಿಂಗ್ ಅಲ್ಲಿ ಬಳಸುವ, ಪೇಂಟ್ ನಲ್ಲಿ ದೊರಕುವ 17 ಬಗೆಯ ಪ್ಲಾಸ್ಟಿಕ್ ಗಳು ಸೇರಿ 10,00,000 ದಿಂದ 1,00,00,000ರ ವರೆಗೆ ಪ್ಲಾಸ್ಟಿಕ್ ಕಣಗಳು ಅಂದರೆ ಮೈಕ್ರೋಪ್ಲಾಸ್ಟಿಕ್ ಗಳು ಕೇವಲ ಒಂದು ಕ್ಯುಬಿಕ್ ಮೀಟರ್ ಜಾಗದಲ್ಲಿ ದೊರಕಿದೆ. ಅದೇ ರೀತಿ 2020ರಲ್ಲಿ ನಡೆದ ಅಂತಹುದೇ ಸಂಶೋಧನೆಯಲ್ಲಿ ಪ್ಲಾಸ್ಟಿಕ್ ಸಂಖ್ಯೆ ಗಣನೀಯವಾಗಿ ಇಳಿದಿದೆ. 2,000 ದಿಂದ 17,000 ಪ್ಲಾಸ್ಟಿಕ್ ಕಣಗಳು ಮಾತ್ರ ಒಂದು ಕ್ಯುಬಿಕ್ ಮೀಟರ್

ಜಾಗದಲ್ಲಿ ದೊರಕಿದೆ. ಈ ಅಚ್ಚರಿಯ ಇಳಿಕೆಯಲ್ಲಿ ಎಷ್ಟು ಸತ್ಯಾಸತ್ಯತೆಗಳಿವೆ ಎಂಬುದು ಸಂಶೋಧಕರಿಗೇ ಗೊತ್ತು.

***ನುಂಗಿದ ಪ್ಲಾಸ್ಟಿಕ್ ಗುಳಿಗೆಗಳು... (ನಮ್ಮಲ್ಲಿ)***

ಅಮೇರಿಕಾದ ಒಬ್ಬ ವ್ಯಕ್ತಿ ವರ್ಷದಲ್ಲಿ 39,000 ದಿಂದ 52,000 ಮೈಕ್ರೋಪ್ಲಾಸ್ಟಿಕ್ ಕಣಗಳನ್ನು ಸೇವಿಸುತ್ತಾನೆ ಎಂದು 2019ರ ಸಂಶೋಧನೆಯೊಂದು ಹೇಳುತ್ತಿದೆ. ಈ ಸಂಖ್ಯೆಯನ್ನು ಬಾಟಲ್ ನೀರು, ಆಹಾರ ಪದಾರ್ಥಗಳಾದ ಮೀನು, ಸಕ್ಕರೆ, ಉಪ್ಪಿನಂತಹ ಪದಾರ್ಥಗಳ ಮೇಲೆ ಈ ಹಿಂದೆ ನಡೆದ ಸಂಶೋಧನಾ ಸಮೀಕ್ಷೆಯಲ್ಲಿ ದೊರೆತ ಅಂಕಿಅಂಶಗಳ ಆಧಾರದ ಮೇಲೆ ಹೇಳಲಾಗಿದೆ.



ಪ್ಲಾಸ್ಟಿಕ್ ನಿಂದ ಆಗುವ ಸಮಸ್ಯೆಗಳನ್ನು ಎತ್ತಿ ತೋರಿಸುವ ಸಂಶೋಧನೆಗಳು ಸಾವಿರಾರು...

ಆದರೆ ಪರಿಹಾರ ಮಾರ್ಗ ಒಂದೇ.
ನಾವು, ನಮ್ಮ ಅರಿವು, ನಮ್ಮ ಜೀವನ ಶೈಲಿ.
ಇದು ಪ್ರತಿಯೊಬ್ಬನ ವೈಯಕ್ತಿಕ ಸವಾಲು!

**ಮೂಲ ಲೇಖನ:** ScienceNewsforStudents



**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯೂ. ಸಿ. ಜಿ. ಬೆಂಗಳೂರು ಜಿಲ್ಲೆ**

# ವಸುಂಧರೆ

ಸಹನಶೀಲೆ ಕ್ಷಮಯಾಮೂರ್ತಿ ಈ ವಸುಂಧರೆ
ಪ್ರಾಣಿ ಪಕ್ಷಿ ಜೀವಸಂಕುಲಕೆ ನೀನೆ ಆಸರೆ
ನಿಜವಾದ ಸ್ವರ್ಗವೇ ಈ ಧರೆ
ಪದಗಳ ಕೊರತೆ ಎನಗೆ ನಾ ನಿನ್ನ ವರ್ಣಿಸಲಾರೆ...

ಉಟ್ಟು ನೀ ಹಚ್ಚ ಹಸಿರ ಸೀರೆ
ಸೌಂದರ್ಯದಲಿ ಮಾಡಿಹೆ ಮನಸೂರೆ
ಮೈಯೆಲ್ಲ ತಂಪು ಮುಂಜಾನೆ ಮೂಡುತಿರೆ
ಕೆನ್ನೆಯೆಲ್ಲ ಕೆಂಪು ಮುಸ್ಸಂಜೆ ಆಗುತಿರೆ...

ಗಾಳಿ ಮಳೆ ಬಿಸಿಲು ಚಳಿ ಎಲ್ಲ ನಿನ್ನೊಳಿರೆ
ವಿಸ್ಮಯಗಳದೆಷ್ಟು ನಿನ್ನ ಕೈ ಸೆರೆ
ಏನಿಲ್ಲ ಏನುಂಟು ಅರಿಯಲು ನಾ ಸೋತೆ ನೀರೆ
ಸಹಿಸಲಸಾಧ್ಯ ನೀ ಕೋಪಗೊಂಡರೆ...

ವನರಾಶಿ ಹಳ್ಳ ಕೊಳ್ಳ ನದಿ ಸಾಗರ ಗುಡ್ಡ ಬೆಟ್ಟ ಗಿರಿ ಶಿಖರ ಇತರೆ
ಯಾವುದೆಲ್ಲ ನಿನ್ನ ಸರಕು ಎಲ್ಲಕೂ ನೀ ಉಸಿರೆ
ನಿನ್ನ ನೋಡ ಬಂದರೇನೆ ಚಂದ್ರಮ ಚುಕ್ಕಿ ತಾರೆ
ನೋಡಿದಷ್ಟು ಮುದವ ಕೊಡುವ ನೀನು ಸುಮಧುರೆ...

ಕಾಲಕ್ಕೆ ತಕ್ಕಂತೆ ರೂಪುಗೊಳುವ ಅಪ್ಸರೆ
ಹಕ್ಕಿಗಳ ಕಲರವದಿ ಝರಿಯ ಜುಳು ಜುಳು ನಾದದಿ ಹೂಗಳು ನಗುತಿರೆ
ಮೈಮನ ತಣಿಸುವ ಸೊಬಗಿನ ಸುಂದರೆ
ನಿನ್ನೊಡಲಲಿ ಜನ್ಮವ ಪಡೆದವರದೆಷ್ಟು? ನಿನಗೆ ಸರಿಸಾಟಿ ಯಾರೆ?...

ಪ್ರತಿಭಾ ಪ್ರಶಾಂತ
ಉತ್ತರ ಕನ್ನಡ ಜಿಲ್ಲೆ

# ಪ್ರಕೃತಿ ಬಿಂಬ



**ಮೀನು ಗೂಬೆ** **© ಸನತ್ ಶಾನುಭೋಗ**

ಮೀನು ಗೂಬೆ ಅಥವಾ ಮೀನು ಗುಮ್ಮ ಎಂದು ಕರೆಯಲ್ಪಡುವ ಈ ನಿಶಾಚರ ಹಕ್ಕಿ ಸಾಮಾನ್ಯವಾಗಿ ಭಾರತ, ದಕ್ಷಿಣ ಮತ್ತು ಪೂರ್ವ ಏಷ್ಯಾ ಮತ್ತು ಶ್ರೀಲಂಕಾದಲ್ಲಿ ಕಂಡುಬರುತ್ತದೆ. ಕಂದು ಬಣ್ಣದ ಮೀನು ಗೂಬೆಯು ದಟ್ಟವಾದ ಗರಿಗಳಿಂದ ಕೂಡಿದ ಕೊಂಬನ್ನು ಪ್ರಧಾನವಾಗಿ ಹೊಂದಿದೆ ಹಾಗು ಮೇಲ್ಭಾಗದಲ್ಲಿ ಕಪ್ಪು ಮತ್ತು ಕಡುಗಂದು ಬಣ್ಣದ ಗೆರೆಗಳನ್ನು ಹೊಂದಿದೆ. ಒಂಟಿಯಾಗಿ ಅಥವಾ ಜೋಡಿಗಳಲ್ಲಿ ಹೊಳೆ ಕೆರೆಗಳ ಹತ್ತಿರದ ದೊಡ್ಡ ದೊಡ್ಡ ಮರಗಳ ಮೇಲೆ ಕುಳಿತಿರುತ್ತವೆ. ದಟ್ಟವಾದ ಮರಗಳಿರುವಲ್ಲಿ ಹಳ್ಳಿಗಳ ಕೆರೆಗಳಿಗೆ ಹತ್ತಿರವಿರುತ್ತವೆ. ಊಹ್ಹೋ ಎಂದು ಹೂಂಕರಿಸಿದಂತೆ ನೀಳವಾಗಿ ಕೂಗುತ್ತವೆ. ಹಗಲೆಲ್ಲಾ ದೊಡ್ಡ ಮರಗಳ ಸೊಪ್ಪಿನ ನಡುವೆ ನಿದ್ರಿಸುತ್ತದೆ. ಮೀನು, ಏಡಿ, ಹಕ್ಕಿಗಳು, ಕಪ್ಪೆ, ಮೊಲ ಇತ್ಯಾದಿಗಳನ್ನು ಬೇಟೆಯಾಡುತ್ತವೆ. ಹಳೆಯ ಬೃಹತ್ ಮರಗಳ ಪೊಟ್ಟರೆಗಳಲ್ಲಿ ಮತ್ತು ಪರ್ವತ ಶಿಖರಗಳ ಬಂಡೆ ಬಿರುಕಿನಲ್ಲಿ ಗೂಡು ಮಾಡುತ್ತವೆ.



**ಕೊಂಬಿನ ಗೂಬೆ** **© ಸನತ್ ಶಾನುಭೋಗ**

ಹದ್ದಿನ ಗಾತ್ರದ ಕಡು ಬೂದು ಬಣ್ಣದ ಈ ಹಕ್ಕಿಯು, ಸ್ಟ್ರಿಜಿಡೇ (Strigidae) ಕುಟುಂಬಕ್ಕೆ ಸೇರಿದೆ. ಇವು ಸಾಮಾನ್ಯವಾಗಿ ಯುರೋಪ್ ಮತ್ತು ಏಷ್ಯಾ ಖಂಡಗಳಲ್ಲಿ ಕಾಣಸಿಗುತ್ತವೆ. ತಲೆಯ ಮೇಲೆ ಕೊಂಬಿನಂತಹ ಕಡು ಕಂದು ಬಣ್ಣದ ಪುಕ್ಕ ಇದರ ವಿಶೇಷ ಲಕ್ಷಣ. ಕೇಸರಿ ಕಣ್ಣು, ಬಾಗಿದ ಚೂಪು ಕೊಕ್ಕು, ಎದೆ, ಹೊಟ್ಟೆ ಕೆಳ ಭಾಗ ತಿಳಿ ಕಂದು ಬಣ್ಣ ಇರುತ್ತದೆ. ಪುಕ್ಕಗಳಿರುವ ಬಲಿಷ್ಠ ಕಾಲುಗಳಿರುತ್ತವೆ. ಇದರ ಪುಕ್ಕಗಳಿಗೆ ವಿಶೇಷ ಅಂಚಿರುವುದರಿಂದ ಹಾರುವಾಗ ಶಬ್ದವಾಗುವುದಿಲ್ಲ. ಇದರಿಂದ ತನ್ನ ಬೇಟೆಯ ಮೇಲೆ ಎರಗಲು ಅನುಕೂಲವಾಗುತ್ತದೆ. ಇವು ಸಂಜೆಯ ವೇಳೆಯಲ್ಲಿ ಬೂಬು...ಬೂಬು...ಬೂಬು... ಎಂದು ಕೂಗುತ್ತವೆ. ಇವು ಬೃಹತ್ ಮರಗಳಲ್ಲಿ, ಹಳೆಯ ಕಟ್ಟಡಗಳಲ್ಲಿ ವಾಸಿಸುತ್ತವೆ. ಹಾಗು ಪೊಟರೆಗಳಲ್ಲಿ ಗೂಡು ಕಟ್ಟುತ್ತವೆ. ಮೀನು, ಹಾವು, ಇಲಿ ಇತ್ಯಾದಿಗಳು ಇದರ ಆಹಾರವಾಗಿವೆ.



**ಗಿಡುಗಗೂಬೆ** **© ಸನತ್ ಶಾನುಭೋಗ**

ಚುಕ್ಕೆ-ಹೊಟ್ಟೆಯ ಹದ್ದು-ಗೂಬೆಗಳು ಭಾರತದ ಉಪಖಂಡ ಮತ್ತು ಆಗ್ನೇಯ ಏಷ್ಯಾದ ದಟ್ಟವಾದ ಆರ್ದ್ರ ತಗ್ಗು ಪ್ರದೇಶಗಳಲ್ಲಿ ಹಾಗು ಬೆಟ್ಟದ ಕಾಡುಗಳಲ್ಲಿ ಕಂಡುಬರುವ ತೀಕ್ಷ್ಣ ನೋಟವುಳ್ಳ ಬೇಟೆ ಪಕ್ಷಿಯಾಗಿವೆ. ಬೂದು ಮತ್ತು ಕಂದು ಬಣ್ಣದ ಹಕ್ಕಿಯಾಗಿದ್ದು, ಹಿಂಭಾಗ ಮತ್ತು ಮೇಲಿನ ರೆಕ್ಕೆಗಳ ಮೇಲೆ ಗಾಢವಾದ ಕಂದು ಬಣ್ಣವನ್ನು ಹೊಂದಿರುತ್ತವೆ. ಗಂಟಲು ಮತ್ತು ಹೊಟ್ಟೆಯ ಕೆಳಭಾಗವು ಮುಖ್ಯವಾಗಿ ಮಸುಕಾದ ಬಣ್ಣದಲ್ಲಿರುತ್ತದೆ ಮತ್ತು ದೇಹದ ಪಾರ್ಶ್ವದ ಉದ್ದಕ್ಕೂ ಕಪ್ಪು ಮತ್ತು ಬಿಳಿ ಸಮತಲ ಪಟ್ಟೆಗಳು, ಹೊಟ್ಟೆಯ ಮೇಲೆ ಮತ್ತು ಬಾಲದ ಹೊದಿಕೆಯ ಅಡಿಯಲ್ಲಿ ವಿಶಾಲವಾದ ಚುಕ್ಕೆಗಳಾಗುತ್ತವೆ. ದೊಡ್ಡ ಹಳದಿ ಕೊಕ್ಕು ಹಾಗು ಕಪ್ಪು ಕಣ್ಣುಗಳನ್ನು ಹೊಂದಿವೆ. ದೊಡ್ಡದಾದ ಕೊಂಬುಗಳು ಬದಿಗಳಲ್ಲಿ ಓರೆಯಾಗಿವೆ. ಈ ಗೂಬೆಯು ತನ್ನ ವಿಚಿತ್ರವಾದ, ಮಾನವ ಧ್ವನಿಯ ಕರೆಗೆ ಹೆಸರುವಾಸಿಯಾಗಿದೆ. ಸಣ್ಣ ಸಸ್ತನಿಗಳು ಮತ್ತು ಇಲಿಗಳು ಇವುಗಳ ಆಹಾರವಾಗಿವೆ.



**ಹಾಲಕ್ಕಿ** © ಸನತ್ ಶಾನುಭೋಗ

ಗೊರವಂಕ ಗಾತ್ರದ ಬೂದು ಬಣ್ಣದ ಹಕ್ಕಿ. ಇವು ಸಾಮಾನ್ಯವಾಗಿ ಭಾರತ, ಬಾಂಗ್ಲಾದೇಶ, ಸಿಲೋನ್, ಪಾಕಿಸ್ತಾನ ಮತ್ತು ಬರ್ಮಾ ದೇಶಗಳಲ್ಲಿ ಕಂಡು ಬರುತ್ತವೆ. ಪರ್ಣಪಾತಿ ಕಾಡು, ಕುರುಚಲು ಕಾಡು, ಜನವಸತಿ ಪ್ರದೇಶಗಳಲ್ಲಿ ಕಂಡು ಬರುವ ಬೇಟೆ ಹಕ್ಕಿ. ದೊಡ್ಡ ಕಣ್ಣುಗಳು ಹಳದಿ ಬಣ್ಣದಿಂದ ಕೂಡಿದ್ದು, ಎದೆಯ ಮೇಲೆ ಬೂದು ಚುಕ್ಕೆಗಳಿದ್ದು, ತಳಭಾಗದಲ್ಲಿ ಬಿಳಿಬಣ್ಣದಿಂದ ಕೂಡಿರುತ್ತದೆ. ಬೂದು ಕಾಲುಗಳು; ಕಪ್ಪು ಪಟ್ಟಿಯಿರುವ ಬೂದು ಮೋಟು ಬಾಲವಿರುತ್ತದೆ. ಇಲಿ ಹೆಗ್ಗಣಗಳನ್ನು ತಿಂದು ರೈತರಿಗೆ ಉಪಕಾರಿಯಾಗಿವೆ. ಹಾಲಕ್ಕಿಗಳ ರೆಕ್ಕೆಯ ಪುಕ್ಕಗಳು ಬಹಳ ಮೃದುವಾಗಿರುತ್ತವೆ. ಹಾಗಾಗಿ ಹಾರುವಾಗ ಶಬ್ದವಾಗುವುದಿಲ್ಲ.

ಇವು ಮರಗಳ ಪೊಟರೆಗಳಲ್ಲಿ ಅಥವಾ ಕಟ್ಟಡಗಳ ಸಣ್ಣ ರಂಧ್ರಗಳಲ್ಲಿ ಬಟ್ಟೆ ಚೂರು, ಹತ್ತಿಗಳಿಂದ ಗೂಡು ಮಾಡುತ್ತವೆ, 3-5 ಮೊಟ್ಟೆಗಳನ್ನು ಇಡುತ್ತದೆ. ಬೀದಿ ದೀಪಕ್ಕೆ ಬರುವ ಹುಳುಗಳು, ಚಿಕ್ಕ ಚಿಕ್ಕ ಇಲಿ, ಕಪ್ಪೆಗಳನ್ನು ಹಿಡಿದು ತಿನ್ನುತ್ತವೆ.

**ಚಿತ್ರ: ಸನತ್ ಶಾನುಭೋಗ**

**ಲೇಖನ: ದೀಪ್ತಿ ಎನ್.**

# ನೀವೂ ಕಾನನಕ್ಕೆ ಬರೆಯಬಹುದು



ಕಡಲ ಆಮೆಗಳು ಸುಮಾರು 10 ಕೋಟಿ ವರ್ಷಗಳ ಹಿಂದಿನವು ಮತ್ತು ಡೈನೋಸಾರ್ ಗಳ ಕಾಲದಲ್ಲೂ ವಾಸಿಸುತ್ತಿದ್ದವು. ಇವುಗಳಿಗೆ ತಮ್ಮ ಆಹಾರವನ್ನು ತಿನ್ನಲು ಹಲ್ಲುಗಳಿಲ್ಲ ಬದಲಿಗೆ ಕೊಕ್ಕಿನಂತಹ ಬಾಯಿಯನ್ನು ಬಳಸುತ್ತವೆ. ಆಮೆಯ ಚಿಪ್ಪುಗಳು 50 ಕ್ಕೂ ಹೆಚ್ಚು ಮೂಳೆಗಳಿಂದ ಮಾಡಲ್ಪಟ್ಟಿದೆ. ಕಡಲ ಆಮೆಗಳು ತುಂಬಾ ದೂರದವರೆಗೆ ವಲಸೆ ಹೋಗುತ್ತವೆ. ಹೆಣ್ಣು ಆಮೆಗಳು ತಮ್ಮ ಮೊಟ್ಟೆಗಳನ್ನು ಇಡಲು ಅವು ಜನಿಸಿದ ಕಡಲತೀರಕ್ಕೆ ಹಿಂತಿರುಗುವುದು ವಿಶೇಷ. ಹವಾಮಾನ ಬದಲಾವಣೆಯಿಂದ ಮರಳಿನ ತಾಪಮಾನವು ಹೆಚ್ಚಾಗುತ್ತಿರುವ ಕಾರಣ ಗಂಡು ಆಮೆಗಳಿಗಿಂತ ಹೆಚ್ಚು ಹೆಣ್ಣು ಆಮೆಗಳು ಜನಿಸುತ್ತಿವೆ. 1,000 ಸಮುದ್ರದ ಆಮೆ ಮರಿಗಳಲ್ಲಿ 1 ಮಾತ್ರ ಉಳಿದುಕೊಳ್ಳುತ್ತದೆ ಎಂದು ಅಂದಾಜಿಸಲಾಗಿದೆ. ಮೊಟ್ಟೆಯಿಂದ ಹಿಡಿದು ದೊಡ್ಡದಾಗುವವರೆಗೂ ಒಂದಲ್ಲ ಒಂದು ರೀತಿಯಲ್ಲಿ ಜೀವನಕ್ಕೋಸ್ಕರ ಹೋರಾಡುತ್ತಿರುತ್ತವೆ. ಇವು ಮೀನುಗಾರಿಕೆಯ ಬಲೆಯಲ್ಲಿ ಆಕಸ್ಮಿಕವಾಗಿ ಸಿಕ್ಕಿಹಾಕಿಕೊಳ್ಳುತ್ತಿವೆ. ಪ್ಲಾಸ್ಟಿಕ್ ಅನ್ನು ಸೇವಿಸುತ್ತಿವೆ. ಈ ರೀತಿಯ ಮಾನವನ ನಿರ್ಲಕ್ಷ್ಯತನವು ಆಮೆಗಳ ಉಳಿವಿಗೆ ಕಂಟಕವಾಗುತ್ತಿದೆ. ಕಡಲ ಆಮೆಗಳ ಬಗ್ಗೆ ಜಾಗೃತಿ ಮೂಡಿಸಲು ಜೂನ್ 16ರಂದು ವಿಶ್ವ ಕಡಲ ಆಮೆ ದಿನವೆಂದು ಆಚರಿಸಲಾಗುತ್ತದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com
**ಅಂಚೆ ವಿಳಾಸ**:

ವೈಲ್ಡ್ ಲೈಫ್ ಕನ್ಸರ್ವೇಷನ್ ಗ್ರೂಪ್,
ಅಡವಿ ಫೀಲ್ಡ್ ಸ್ಟೇಷನ್,
ಒಂಟೆಮಾರನ ದೊಡ್ಡಿ,
ರಾಗಿಹಳ್ಳಿ ಅಂಚೆ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.